ಕೆ. ಬಿ. ಶಿವತಾರಕ್*

# ಶಿಲಾಯುಗದ ನೆಲೆ-ಮೂಗನಾಯಕನಕೋಟೆ

ತುಮಕೂರು ಜಿಲ್ಲೆಯಲ್ಲಿ ಈಗಾಗಲೇ ಶಿಲಾಯುಗದ ನೆಲೆಗಳಿರುವುದು ತಿಳಿದು ಬಂದಿದೆ. ಹಳೇ ಶಿಲಾಯುಗಕ್ಕೆ ಕಿಬ್ಬನಹಳ್ಳಿ, ಬಿಳಿಗೆರೆ, ನಾಗಲಾಪುರ ಮತ್ತು ನಿಡುಗಲ್ಲು; ಸೂಕ್ಷ್ಮಶಿಲಾಯುಗಕ್ಕೆ ಕಿಬ್ಬನಹಳ್ಳಿ, ಮೀನಾಕ್ಷಮ್ಮ ಎಸ್ಟೇಟ್, ಹೋಳಕಲ್ಲು ಬೆಟ್ಟ, ಹಿರೇಗುಂಡಗಲ್ಲು, ನಾಗಲಾಪುರ; ನೂತನಶಿಲಾಯುಗಕ್ಕೆ ವೈ.ಎನ್. ಹೊಸಕೋಟೆ, ನಿಡುಗಲ್ಲು, ಗಂಗ್ಡಾಹಳ್ಳಿ, ಜಲಗಾರದಿಬ್ಬ, ನಾಗಲಾಪುರ, ವೈ. ಎನ್. ಹಳ್ಳಿ, ರಂಗಸಮುದ್ರ, ಸಿದ್ಧರಬೆಟ್ಟ, ಬೆಳ್ಳಿಬಟ್ಟಲಹಳ್ಳಿ, ಬೂದಿಬೆಟ್ಟ, ಸಿದ್ಧಗಂಗಾಬೆಟ್ಟ; ಮತ್ತು ಬೃಹತ್ ಶಿಲಾಯುಗಕ್ಕೆ ಕೇರಳಕಟ್ಟೆ, ಜಕ್ಕನಹಳ್ಳಿ, ನಿಡುಗಲ್ಲು, ವೈ. ಎನ್. ಹೊಸಕೋಟೆ, ವೈ. ಎನ್. ಹಳ್ಳಿ, ಬೂದಿಬೆಟ್ಟ, ರಾಚಮಾರನಹಳ್ಳಿ, ಮರಿದಾಸನಹಳ್ಳಿ, ಹಿರೇಗುಂಡಗಲ್, ಸಿದ್ಧಗಂಗಾಬೆಟ್ಟ, ಸಿದ್ಧರಬೆಟ್ಟ ಸೇರಿವೆ.

ಮೂಗನಾಯಕನಕೋಟೆಯು ಗುಬ್ಬಿಯಿಂದ ೧೧ ಕಿ.ಮೀ. ವಾಯುವ್ಯಕ್ಕಿದ್ದು, ನಿಟ್ಟೂರು ಹೋಬಳಿಗೆ ಸೇರಿದೆ. ಈ ಪ್ರದೇಶದಲ್ಲಿ ಆದಿಮಾನವನು ನೆಲೆಸಿ ತನಗೆ ಅವಶ್ಯವಾಗಿ ಬೇಕಾದ ಶಿಲಾಯುಧಗಳನ್ನು ತಯಾರಿಸಿಕೊಂಡಿರುವುದನ್ನು ಕಾಣಬಹುದು.

ಮೂಗನಾಯಕನ ಕೋಟೆ ಪ್ರದೇಶದಲ್ಲಿ ೧೯೭೨ ಮತ್ತು ೭೩ರಲ್ಲಿ ನಡೆಸಿದ ಪುರಾತತ್ವ ಸರ್ವೇಕ್ಷಣೆಯ ಫಲವಾಗಿ ಅಂತ್ಯ ಹಳೆಶಿಲಾಯುಗದ ಮತ್ತು ಸೂಕ್ಷ್ಮ ಶಿಲಾಯುಗದ ಅವಶೇಷಗಳು ದೊರೆತಿದ್ದು, ಈ ಪ್ರದೇಶವು ಆದಿಮಾನವನ ನಿವಾಸ ಸ್ಥಾನವಾಗಿದ್ದಿತೆಂದೂ ಮತ್ತು ಆಯುಧ ಉದ್ಯಮ ಕೇಂದ್ರವಾಗಿದ್ದಿತೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ.

ಹದಿನಾರನೆಯ ಶತಮಾನದಲ್ಲಿ ಬಿದರೆ ಸೀಮೆಯ ಒಂದು ಗ್ರಾಮವಾಗಿದ್ದ ಮೂಗನಾಯಕನಕೋಟೆ (ಎ.ಕ. XII ಗುಬ್ಬಿ ೧೭) ಹದಿನೆಳನೇಯ ಶತಮಾನದಲ್ಲಿ 'ಮೂಗನಾಯಕ' ಎಂಬ ಪಾಳೆಯಗಾರನ ಪಾಳೆಯಪಟ್ಟಾಗಿದ್ದಿತು. ಸಿರಾದಲ್ಲಿ ಶಿಬಿರ ಹೂಡಿದ್ದ ಮರಾಠ ಸರದಾರ ಪರಶುರಾಮಭಾಹುವಿನ ಸೈನ್ಯದೊಂದಿಗೆ ಇವನು ಹೋರಾಡಿದ್ದನೆಂದು ತಿಳಿದು ಬರುತ್ತದೆ (ಅಭಿಶಂಕರ್ ಕೆ. ೧೯೭೬ : ೫೭೨-೩). ಇದು ಒಂದು ಪ್ರಮುಖ ವ್ಯಾಪಾರೀ ಕೇಂದ್ರವಾಗಿದ್ದು, ಕೋಟೆಯನ್ನು ಹೊಂದಿದ್ದಂತೆ ತಿಳಿದು ಬರುತ್ತದೆ. ಆದರೆ ಈಗ ಯಾವುದೇ ಅವಶೇಷ ಉಳಿದಿಲ್ಲ.

ಡಾ. ಎಂ. ಶೇಷಾದ್ರಿಯವರು ಕಿಬ್ಬನಹಳ್ಳಿಯಲ್ಲಿ ಅಂತ್ಯ ಹಳೆ ಶಿಲಾಯುಗದ ಬಗ್ಗೆ ಸ್ಪಷ್ಟ ಅಭಿಪ್ರಾಯ ಸಲ್ಲಿಸದಿದ್ದರೂ ಅಲ್ಲಿ ದೊರೆತ ಕೆಲವು ಆಯುಧಗಳ ರೂಪುರೇಷೆಯು ಅಂತ್ಯ ಹಳೆ ಶಿಲಾಯುಗದ್ದೆಂದು ಅವರೇ ಕೊಟ್ಟಿರುವ ವಿವರಣೆಯಿಂದ ತಿಳಿಯಬಹುದು. ಆದರೆ ಈ ಆಯುಧಗಳನ್ನು ಅವರೇ ಸೂಕ್ಷ್ಮಶಿಲಾಯುಗದ್ದೆಂದು ಸೂಚಿಸುತ್ತಾರೆ.

* ಇತಿಹಾಸ ಉಪನ್ಯಾಸಕರು, ಸೇಂಟ್ ಮೇರಿಸ್ ಸಿರಿಯನ್ ಕಾಲೇಜು, ಬ್ರಹ್ಮಾವರ-೫೭೬೨೧೩.

ಮೂಗ ನಾಯಕನ ಕೋಟೆಯ ಸುತ್ತ ಮುತ್ತ ದೊರೆತಿರುವ ಅಂತ್ಯ ಹಳೆ ಶಿಲಾಯುಗದ ಆಯುಧಗಳು ಬೆಣಚುಕಲ್ಲು (Quartz) ಮತ್ತು ಸ್ಫಟಿಕ ಶಿಲೆ (Chert) ಯಲ್ಲಿ ರೂಪಿತವಾಗಿದ್ದು ಅವುಗಳಲ್ಲಿ ಮಚ್ಚುಗತ್ತಿ, ಕೊರೆಯುವ ಉಳಿ, ಹೆರೆಗತ್ತಿ, ಇತ್ಯಾದಿ ಪ್ರಮುಖವಾದ ಆಯುಧಗಳಾಗಿವೆ.

**ಸೂಕ್ಷ್ಮ ಶಿಲಾಯುಗ ಸಂಸ್ಕೃತಿ :** ತುಮಕೂರು ಜಿಲ್ಲೆಯಲ್ಲಿ ಇದುವರೆಗೂ ದೊರೆತಿರುವ ಒಂದೇ ಒಂದು ಪ್ರಮುಖ ನೆಲೆ–ಕಿಬ್ಬನಹಳ್ಳಿ. ಇಲ್ಲಿ ದೊರೆತಿರುವ ಆಯುಧಗಳನ್ನು ಡಾ. ಎಂ. ಶೇಷಾದ್ರಿಯವರು ವಿಸ್ತೃತವಾಗಿ ಅಭ್ಯಸಿಸಿದ್ದಾರೆ. ಅದೇ ರೀತಿ ಪ್ರಮುಖವಾದ ಇನ್ನೊಂದು ನೆಲೆಯೇ ಮೂಗನಾಯಕನ ಕೋಟೆ. ಗುಡ್ಡದ ಸುತ್ತ ಮುತ್ತ ಹಲವು ಸ್ಥಳಗಳಲ್ಲಿ ಸೂಕ್ಷ್ಮ ಶಿಲಾಯುಗದ ಆಯುಧಗಳು ದೊರೆತಿವೆ. ಇವುಗಳನ್ನು ಪ್ರಮುಖವಾಗಿ ಬೆಣಚುಕಲ್ಲು, ಸ್ಪಟಿಕ ಶಿಲೆ ಮತ್ತು ಹಾಲು ಬಣ್ಣದ ಬೆಣಚುಕಲ್ಲುಗಳಲ್ಲಿ ತಯಾರಿಸಲಾಗಿದೆ. ಇದೇ ಸ್ಥಳದಲ್ಲಿ ಈ ಕಲ್ಲುಗಳು ದೊರೆತಿವೆ. ಇಲ್ಲಿ ಬಹು ಸಂಖ್ಯೆಯಲ್ಲಿ ನಿರುಪಯುಕ್ತ ಕಲ್ಲುಗಳು ದೊರೆಯುವುದರಿಂದ ಈ ನೆಲೆಯು ಆಯುಧ ಉದ್ಯಮದ ನೆಲೆಯೆಂದು ಸ್ಪಷ್ಟವಾಗಿ ತಿಳಿಯುತ್ತದೆ.

ಒರೆಯುವ ಆಯುಧಗಳು, ಕೂರಲಗು ಫಲಕಗಳು, ಅರ್ಧಚಂದ್ರಾಕೃತಿಯ ಆಯುಧಗಳು, ಕೊರೆಯುವ ಆಯುಧಗಳು, ಬಾಣದ ಮೊನೆಗಳು, ಒಂದು ಬದಿ ಮೊಂಡಾದ ತೆಳು ಚಕ್ಕೆಗಳು, ಎರಡೂ ಬದಿ ಮೊನಚಾದ ತೆಳು ಚಕ್ಕೆಗಳು, ಹೆರೆಯುವ ಸಣ್ಣ ಚಕ್ಕೆಗಳು ಮುಂತಾದ ಅತಿಮುಖ್ಯ ಮಾದರಿಯ ಆಯುಧಗಳು ಇಲ್ಲಿ ದೊರೆತಿವೆ.

ಇಲ್ಲಿ ದೊರೆತಿರುವ ಆಯುಧಗಳಿಂದ ಈ ಜನರ ಆಯುಧತಯಾರಿಕಾ ತಾಂತ್ರಿಕತೆಯು ವಿಶಿಷ್ಟ ಪೂರ್ಣವಾದುದೆಂದು ತಿಳಿದು ಬರುತ್ತದೆ. ಅಲ್ಲದೆ ಕರ್ನಾಟಕದ ಆಗ್ನೇಯ ಭಾಗವು ಶಿಲಾಯುಗದ ಮಾನವನ ಸಂಸ್ಕೃತಿಗೆ ಆಯಕಟ್ಟಿನ ಸ್ಥಳವಾಗಿದ್ದಿತೆಂಬ ಅಂಶ ಸ್ಪಷ್ಟವಾಗುತ್ತದೆ.

## ಗ್ರಂಥ ಋಣ


Abhishankar K. Tumkur District Gazetteer : Government of Karnataka ; Bangalore 1969

Bruce-Foote R. The Foote collection of Indian Prehistoric and Proto historic Antiquities Notes on their ages and Distribution. Madras. 1916

Sharma I. K. "Ash-Mounds and Hero Stones. Dist. Tumkur" : Indian Archaeology/A Review-1980-81 : Archaeological Survey of India, New Delhi, 1980-81

ಶಿವತಾರಕ್ ಕೆ. ಬಿ. "Neolithic Sites of Tumkur Region" ಎಂಬ ಸಂಪ್ರಬಂಧವನ್ನು ಕನ್ನಡ ಅಧ್ಯಯನ ಸಂಸ್ಥೆ. ಧಾರವಾಡ, ಇವರ ಆಶ್ರಯದಲ್ಲಿ ನಡೆದ U. G. C. National Seminar on recent Studies in Proto-Historic Cultures of South India ದಲ್ಲಿ ಮಂಡಿಸಿದ ಸಂಪ್ರಬಂಧ (ಅಪ್ರಕಟಿತ) 1991

ಶಿವತಾರಕ್ ಕೆ. ಬಿ. "ತುಮಕೂರು ಜಿಲ್ಲೆಯಲ್ಲಿ ಇತ್ತೀಚೆಗೆ ದೊರೆತ ಕೆಲವು ಪ್ರಾಗೈತಿಹಾಸಿಕ ನೆಲೆಗಳು" ಇತಿಹಾಸ ದರ್ಶನ-೭ ; ಬೆಂಗಳೂರು-1991

ಶಿವತಾರಕ್ ಕೆ. ಬಿ. "ತುಮಕೂರು ಜಿಲ್ಲೆಯ ಪ್ರಾಗಿತಿಹಾಸ" (ಪಿ ಎಚ್. ಡಿ. ಸಂಶೋಧನೆಯ ನೋಂದಣೆಗಾಗಿ ಒಪ್ಪಿಸಿದ ಸಂಪ್ರಬಂಧ) ಕನ್ನಡ ವಿಶ್ವವಿದ್ಯಾಲಯ : ಹಂಪಿ. ೧೯೯೩

Sheshadri M. "Microlithic Industry of Kibbanahalli, Mysore State" Current Science-23 ; Bangalore, 1954

Sheshadri M. The Stone-Using Cultures of Prehistoric and Protohistoric Mysore, London 1956

Sheshadri M. "Stone Age Tools from Salvadgi, Bijapura Dist, Mysore State". Mysore University Journal, Mysore. 1961 :

Sletar H. K. "Mysore Geological Department Records-8" Bangalore, 1906